## ಕರ್ನಾಟಕ ವಿಧಾನ ಪರಿಷತ್ತು

ಮಾನ್ಯ ವಿಧಾನ ಪರಿಷತ್ತಿನ ಸದಸ್ಯರು : ಡಾ. ವೈ.ಎ. ನಾರಾಯಣಸ್ವಾಮಿ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1834

ಉತ್ತರಿಸಬೇಕಾದ ದಿನಾಂಕ : 15-03-2022

ಉತ್ತರಿಸಬೇಕಾದ ಸಚಿವರು : ಸಹಕಾರ ಸಚಿವರು

| ಕ್ರಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಚಿಕ್ಕಬಳ್ಳಾಪುರ ಜಿಲ್ಲೆಗೆ ಪ್ರತ್ಯೇಕವಾದ ಡಿ.ಸಿ.ಸಿ ಬ್ಯಾಂಕ್ ಸ್ಥಾಪಿಸಲು ಸರ್ಕಾರ ಉದ್ದೇಶಿಸಿದೆಯೇ; | ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಚಿಕ್ಕಬಳ್ಳಾಪುರ ಜಿಲ್ಲೆಗೆ ಪ್ರತ್ಯೇಕ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕ್‌ನ್ನು ಮಂಜೂರು ಮಾಡುವಂತೆ ಕೋರಿರುತ್ತಾರೆ.<br><br>ಕೋಲಾರ ಮತ್ತು ಚಿಕ್ಕಬಳ್ಳಾಪುರ ಡಿ.ಸಿ.ಸಿ. ಬ್ಯಾಂಕ್ ನಿ., ಕೋಲಾರ ಈ |
| ಆ) | ಹಾಗಿದ್ದಲ್ಲಿ, ಹೊಸ ಡಿ.ಸಿ.ಸಿ ಬ್ಯಾಂಕ್ ಸ್ಥಾಪಿಸಲಾಗುವುದೇ ಅಥವಾ ಕೋಲಾರ ಜಿಲ್ಲೆಯಿಂದ ಡಿ.ಸಿ.ಸಿ ಬ್ಯಾಂಕ್‌ನ್ನು ವಿಭಜಿಸಲಾಗುವುದೇ: (ಮಾಹಿತಿ ನೀಡುವುದು) | ಬ್ಯಾಂಕನ್ನು ವಿಭಜಿಸಿ ಚಿಕ್ಕಬಳ್ಳಾಪುರ ಜಿಲ್ಲೆಗೆ ಪ್ರತ್ಯೇಕ ಜಿಲ್ಲಾ ಕೇಂದ್ರ ಸಹಕಾರ ಬ್ಯಾಂಕನ್ನು ಸ್ಥಾಪಿಸುವಂತೆ ಅಗತ್ಯ ಕ್ರಮ ಕೈಗೊಳ್ಳಲು ದಿ:6-11-2020 ರಂದು ಜರುಗಿದ ಬ್ಯಾಂಕಿನ 2019-20 ನೇ ಸಾಲಿನ ಸರ್ವ ಸದಸ್ಯರ ಸಭೆಯಲ್ಲಿ ಚರ್ಚಿಸಲಾಗಿದೆ.<br><br>National Institute for Rural Banking, Bengaluru (NIRB) ಇವರು ಕೋಲಾರ-ಚಿಕ್ಕಬಳ್ಳಾಪುರ ಬ್ಯಾಂಕ್‌ನ್ನು ವಿಭಜನೆ ಮಾಡಿ ಚಿಕ್ಕಬಳ್ಳಾಪುರ ಜಿಲ್ಲೆಗೆ ಪ್ರತ್ಯೇಕ ಡಿ.ಸಿ.ಸಿ. ಬ್ಯಾಂಕ್ ರಚನೆ ಸಂಬಂಧ feasibility Report ಸಿದ್ಧಪಡಿಸಿ ದಿನಾಂಕ:04.03.2021 ರಂದು ನೀಡಿರುತ್ತಾರೆ.<br><br>ಬ್ಯಾಂಕಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಬ್ಯಾಂಕ್ ವಿಭಜನೆ ಸಂಬಂಧ ಸಲ್ಲಿಸಿದ ಪ್ರಸ್ತಾವನೆ ದಿನಾಂಕ:01-06-2021 ರನ್ವಯ ಸಹಕಾರ ಸಂಘಗಳ ನಿಬಂಧಕರು ದಿನಾಂಕ:07-09-2021 ರಂದು ಜಿ.ಎಂ, ಆರ್.ಬಿ.ಐ, ಬೆಂಗಳೂರು ಇವರಿಗೆ ಕೋಲಾರ-ಚಿಕ್ಕಬಳ್ಳಾಪುರ ಬ್ಯಾಂಕನ್ನು ವಿಭಜಿಸಿ ಪ್ರತ್ಯೇಕ ಚಿಕ್ಕಬಳ್ಳಾಪುರ ಬ್ಯಾಂಕ್ ರಚಿಸಲು ಅನುಮತಿ ಕೋರಿ ಹಾಗೂ ದಿನಾಂಕ:09.09.2021 ರಂದು ಸಿ.ಜಿ.ಎಂ. ನಬಾರ್ಡ್ ಇವರಿಗೆ ಪತ್ರ ಬರೆದು ಸಾಧ್ಯತಾ ವರದಿಯನ್ನು ನೀಡುವಂತೆ ಕೋರಿರುತ್ತಾರೆ.<br><br>ದಿನಾಂಕ:10.11.2021 ರಂದು ನಡೆದ ಬ್ಯಾಂಕಿನ 2020-21 ನೇ ಸಾಲಿನ ಸರ್ವ-ಸದಸ್ಯರ ವಾರ್ಷಿಕ ಮಹಾ ಸಭೆಯಲ್ಲಿ ಬ್ಯಾಂಕಿನ ವಿಭಜನೆಯ ಪ್ರಸ್ತಾವನೆ ಕುರಿತಂತೆ ಚರ್ಚಿಸಿ ಹೆಚ್ಚಿನ ಪರಿಶೀಲನೆ ನಡೆಸಿ ವಿಷಯವನ್ನು ಮುಂದಿನ ಸರ್ವ ಸದಸ್ಯರ ಸಭೆಯಲ್ಲಿ ಮಂಡಿಸಲು ತೀರ್ಮಾನಿಸಿರುವುದಾಗಿ ತಿಳಿಸಿರುತ್ತಾರೆ. |

| | | |
|---|---|---|
| ಇ) | ಯಾವ ಕಾಲಮಿತಿಯಲ್ಲಿ ಮೇಲ್ಕಂಡ ಪ್ರಕ್ರಿಯೆಯನ್ನು ಪೂರ್ಣಗೊಳಿಸಲಾಗುವುದು? (ವಿವರ ನೀಡುವುದು) | ಆರ್.ಬಿ.ಐ ಅನುಮತಿ ಮತ್ತು NABARD ಕಛೇರಿಯಿಂಧ ಸಾಧ್ಯತಾ ವರದಿ ಸ್ವೀಕೃತವಾದ ನಂತರ ನಿಯಮಾನುಸಾರ ಪರಿಶೀಲಿಸಿ ಚಿಕ್ಕಬಳ್ಳಾಪುರ ಜಿಲ್ಲೆಗೆ ಪ್ರತ್ಯೇಕ ಡಿಸಿಸಿ ಬ್ಯಾಂಕ್ ರಚನೆ ಸಂಬಂಧ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆ ಮತ್ತು ನಿಯಮಗಳ ಅವಕಾಶದಂತೆ ಕ್ರಮವಿಡಲಾಗುವುದು. |

**ಸಂಖ್ಯೆ: ಸಿಒ 50 ಸಿಸಿಬಿ 2022**

(ಎಸ್.ಟಿ. ಸೋಮಶೇಖರ್)
**ಸಹಕಾರ ಸಚಿವರು**